ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಮನೆಯಂಗಳದಲ್ಲಿ ಕೈತೋಟ ಮಾಡುವವರಿಗೆ ಪ್ರೋತ್ಸಾಹ ನೀಡುವ ಕುರಿತು

ಶ್ರೀ ಆರ್. ಧರ್ಮಸೇನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

496 (759) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ತೋಟಗಾರಿಕೆ ಇಲಾಖೆಯಲ್ಲಿ ಮನೆಯಂಗಳದಲ್ಲಿ ಕೈತೋಟ ಮಾಡುವವರಿಗೆ ಮತ್ತು ಟೆರೇಸ್‌ಗಳಲ್ಲಿ ಪಾಟ್‌ಗಳಲ್ಲಿ ಕೈತೋಟ ಮಾಡಿ ಹಣ್ಣು, ಹೂವು ಮತ್ತು ತರಕಾರಿ ಬೆಳಯುವವರಿಗೆ ಯಾವ ರೀತಿ ಪ್ರೋತ್ಸಾಹ ನೀಡಲಾಗುತ್ತಿದೆ; ಈ ಬಗ್ಗೆ ಯಾವ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗಿದೆ;

(ಆ) ಇವರಿಗೆ ಬೀಜ ಮತ್ತು ಗೊಬ್ಬರಗಳನ್ನು ಉಚಿತವಾಗಿ ಅಥವಾ ಕಡಿಮೆ ಬೆಲೆಯಲ್ಲಿ ನೀಡುವ ಪದ್ಧತಿ ಇದೆಯೇ;

(ಇ) ಮನೆಯಲ್ಲೇ ಕೈತೋಟ ಮಾಡಿಕೊಂಡು ಹಣ್ಣು, ಹೂವು ಮತ್ತು ತರಕಾರಿ ಬೆಳೆಸುವವರಿಗೆ ಬೀಜ, ಗೊಬ್ಬರ ನೀಡುವುದಲ್ಲದೆ ಸಲಹೆ ಸೂಚನೆ ಮತ್ತು ಮಾರ್ಗದರ್ಶನ ನೀಡಲು ಸರ್ಕಾರ ಯೋಜನೆ ರೂಪಿಸಿದೆಯೇ ?